# 'ಕವಿತಾರ್ಕಿಕಕೇಸರಿ' ಶ್ರೀ ವೇದಾಂತದೇಶಿಕರು

(ಸಾ.ಶ. ೧೨೬೮-೧೩೬೯)

ಶ್ರೀ ನಾಥಮುನಿ-ಯಾಮುನಾಚಾರ್ಯ-ರಾಮಾನುಜಾಚಾರ್ಯ - ಈ ಮುನಿತ್ರಿತಯ-ದಿಂದ ಪ್ರತಿಷ್ಠಾಪಿತವಾದ ಶ್ರೀವೈಷ್ಣವ ಪರಂಪರೆಯಲ್ಲಿ ಘಂಟಾನಾದದಂತೆ ಮೊಳಗುವ ನಂತರದ ಹೆಸರು ಘಂಟಾವತಾರಿಗಳಾದ ಶ್ರೀ ವೇದಾಂತ ದೇಶಿಕರದು. ಇವರನ್ನು ಶ್ರೀವೈಷ್ಣವಪರಂಪರೆಯಲ್ಲಿ ತಿರುಪತಿಯ ವೇಂಕಟೇಶ್ವರನ ಆಲಯದ ಘಂಟೆಯ ಅವತಾರವೆಂದೇ ಭಾವಿಸಿ ಗೌರವಿಸಲಾಗುತ್ತದೆ. ಕವಿತ್ವದ ಕೋಮಲತೆಯನ್ನೂ, ತರ್ಕಶಾಸ್ತ್ರದ ಕರ್ಕಶತೆಯನ್ನೂ ಮೈಗೂಡಿಸಿಕೊಂಡು ತಮ್ಮ ಅಪಾರಪಾಂಡಿತ್ಯದ ಎರಕದಲ್ಲಿ ಹಾಕಿ, ಶ್ರೀವೈಷ್ಣವಸಿದ್ಧಾಂತದ ಕೀರ್ತಿಯನ್ನು ಗಗನಚುಂಬಿಯನ್ನಾಗಿಸಿ "ಕವಿ-ತಾರ್ಕಿಕ-ಕೇಸರಿ" ಎಂಬ ಅನ್ವರ್ಥಕವನ್ನು ಪಡೆದ ಮಹನೀಯರು. ತಮಿಳು-ಸಂಸ್ಕೃತ-ಪ್ರಾಕೃತಗಳೆಂಬ ಮೂರೂ ನುಡಿಗಳಲ್ಲಿ ರಚನೆಗಳನ್ನು ಮಾಡಿದ ಈ ಮಹಾನುಭಾವರು ಮೂಲತಃ ಕಾಂಚಿಯವರು. ಜನಿಸಿದ್ದು ಸಾಮಾನ್ಯಶಕ ೧೨೬೮ರಲ್ಲಿ ಕಾಂಚಿಯ ಅನಂತಸೂರಿಗಳ ಮಗ "ವೇಂಕಟನಾಥ"ನಾಗಿ. ಇಂದು ಶ್ರೀವೈಷ್ಣವಾಲಯಗಳಲ್ಲಿ ಪೂಜಿಸಲ್ಪಡುವ ಈ ಧನ್ಯಜೀವಿಗಳು ಜೀವಿಕೆಗಾಗಿ ಆಶ್ರಯಿಸಿದ್ದು ಊಂಛವೃತ್ತಿಯನ್ನು. ಬಡತನವನ್ನು ಭಗವಂತನ ಹಸಾದವೆಂಬಂತೆ ಉಂಡ ಇವರ ಕೃತಿರತ್ನಗಳು ಅನೇಕ - ಪಾದುಕಾಸಹಸ್ರ, ದಯಾಶತಕ, ಗೋದಾ-ಸ್ತುತಿ, ಹಯಗ್ರೀವಸ್ತೋತ್ರ, ರಘುವೀರಗದ್ಯ, ಗೋಪಾಲವಿಂಶತಿ, ಅಭೀತಿಸ್ತವ, ಯಾದವಾಭ್ಯುದಯ ಮುಂತಾದ ಸ್ತೋತ್ರಕೃತಿಗಳು, ಸ್ತೋತ್ರರತ್ನಭಾಷ್ಯ, ಚತು-ಶ್ಲೋಕೀಭಾಷ್ಯ ಇತ್ಯಾದಿ ಭಾಷ್ಯಗ್ರಂಥಗಳು, ಅಧಿಕಾರಸಂಗ್ರಹ, ಪರಮಪದಸೋಪಾನ, ಗೀತಾರ್ಥಸಂಗ್ರಹ ಮುಂತಾದ ತಮಿಳು ಕೃತಿಗಳು, ಸಂಕಲ್ಪಸೂರ್ಯೋದಯವೆಂಬ ನಾಟಕ, ಶತದೂಷಣಿಯೇ ಮೊದಲಾದ ವೇದಾಂತಗ್ರಂಥಗಳು, ಇಷ್ಟೇ ಅಲ್ಲದೆ ಮತ್ತೂ ಅನೇಕ ತರ್ಕ-ವ್ಯಾಕರಣ-ವ್ಯಾಖ್ಯಾನ-ಭೂಗೋಳ-ಶಿಲ್ಪಾದಿ ಶಾಸ್ತ್ರಗಂಥಗಳ ರಚನೆಯು ಈ ಚಿರಸ್ಮರಣೀಯರ ಹೆಗ್ಗಳಿಕೆ. ಸ್ತೋತ್ರಕಾವ್ಯಪ್ರಕಾರವನ್ನು ಕವಿ-ಸಹೃದಯರೆಲ್ಲರ ಮನವನ್ನು ಸೂರೆಗೊಳ್ಳುವಂತೆ ಕೃತಿರಚನೆಗಳನ್ನು ಮಾಡಿದ ಇವರು ಮಲಿಕ್ ಕಾಫೂರ್ ದಕ್ಷಿಣಾಪಥದ ಮೇಲೆ ದಂಡಯಾತ್ರೆಯನ್ನು ಕೈಗೊಂಡ ಕಾಲದಲ್ಲಿ ಆತ್ಮರಕ್ಷಣಾರ್ಥವಾಗಿ ಕರ್ಣಾಟಕದ ಸತ್ಯಗಾಲಕ್ಕೆ ಬಂದು, ಮೇಲುಕೋಟೆಯನ್ನು ದರ್ಶಿಸಿಕೊಂಡು ಹೋಗಿದ್ದರು. ಸುಮಾರು ೧೦೧ ವರ್ಷಗಳ ಕಾಲ ಜೀವಿಸಿದ್ದ ಈ ಪುಣ್ಯಜೀವರು ಶ್ರೀರಂಗಕ್ಷೇತ್ರದಲ್ಲಿ ಪರಮಪದವನ್ನು ಸೇರಿದರು.

ಅನುವಾದಕರ ಪರಿಚಯ

## ಸುದರ್ಶನ್ ಮುರಳೀಧರ (ಜ. ೧೯೯೫)

ಬಿ.ಇ. (ಕಂಪ್ಯೂಟರ್ ಸೈನ್ಸ್ ಮತ್ತು ಇಂಜಿನಿಯರಿಂಗ್). ಪ್ರಸ್ತುತ ಸಾಫ್ಟ್-ವೇರ್ ಕ್ಷೇತ್ರದಲ್ಲಿ ವೃತ್ತಿ. ಪ್ರವೃತ್ತಿಯಿಂದ ಕಾವ್ಯಾಧ್ಯಾಯಿ ಹಾಗೂ ಕಾವ್ಯಾಭ್ಯಾಸಿ. ಕನ್ನಡ-ತೆಲುಗು-ಸಂಸ್ಕೃತಭಾಷೆಗಳಲ್ಲಿ ಛಂದೋಬದ್ಧವಾದ ಕಾವ್ಯರಚನೆ, ವಿವಿಧ ದೇಶ-ಭಾಷೆಗಳ ಅಭ್ಯಾಸ, ಚಿತ್ರಕಲೆ, ಇತಿಹಾಸ ಹಾಗೂ ದೇವಾಲಯಶಿಲ್ಪಗಳಲ್ಲಿ ಆಸಕ್ತಿ.

*Śrīkarṇāṭagodāstava*, a classical Kannada poetic translation of Vedānta-deśika's Sanskrit *stotra* '*Godāstuti*'
by Sudarshan Muralidhara

No. 7C-13, 5th Main, 7th Cross, Srinidhi Layout
Konanakunte, Bengaluru - 560062
88616 98212 | *sudarshan.murali95@gmail.com*

ಮೊದಲ ಪ್ರಕಟಣೆ
ಡಿಸೆಂಬರ್ ೨೦೨೧

ಹಕ್ಕುಗಳು © ಅನುವಾದಕರವು

ವಿನ್ಯಾಸ – ಹರಿ ರವಿಕುಮಾರ್

# ಅನುವಾದಕರ ಅರಿಕೆ

। ಹರಿಃ ಓಂ ।

ನೀಲಾತುಙ್ಗಸ್ತನಗಿರಿತಟೀ ಸುಪ್ತಮುದ್ಬೋಧ್ಯ ಕೃಷ್ಣಂ
ಪಾರಾರ್ಥ್ಯಂ ತಂ ಶ್ರುತಿಶತಶಿರಸ್ಸಿದ್ಧಮಧ್ಯಾಪಯನ್ತೀ ।
ಸ್ವೋಚ್ಛಿಷ್ಟಾಯಾಂ ಸ್ರಜಿ ನಿಗಲಿತಂ ಯಾ ಬಲಾತ್ಕೃತ್ಯ ಭುಙ್ಕ್ತೇ
ಗೋದಾ ತಸ್ಯೈ ನಮ ಇದಮಿದಂ ಭೂಯ ಏವಾಸ್ತು ಭೂಯಃ ॥

ರಾಮಾನುಜದಯಾಪಾತ್ರಂ ಜ್ಞಾನವೈರಾಗ್ಯಭೂಷಣಮ್ ।
ಶ್ರೀಮದ್ವೇಙ್ಕಟನಾಥಾರ್ಯಂ ವನ್ದೇ ವೇದಾನ್ತದೇಶಿಕಂ ॥

ಭಕ್ತಿಯೆಂಬ ಹೊಳೆಯನ್ನು ಕಾವ್ಯದ ನೆಲೆಗಟ್ಟಿನ ಅಣೆಕಟ್ಟಿಗೆ ತಂದು ಅದನ್ನು ಅಚ್ಚುಕಟ್ಟಾಗಿಸಿ ಸ್ತೋತ್ರಕಾವ್ಯವೆಂಬ ಕಾವ್ಯಪ್ರಕಾರವನ್ನು ಹರಿ-ಸಲು ಹವಣಿಸಿದವರು ಹಲವರು. ಅದರೆ ಸಫಲವಾಗಿ ಹರಿಸಿದವರು ಮಾತ್ರ ಕೆಲವರು. ಏಕೆಂದರೆ ಸ್ತೋತ್ರಕಾವ್ಯರಚನೆಯೆಂಬುದು ಸಕಲಕಾವ್ಯ-ಲಕ್ಷಣಗಳನ್ನೊಳಕೊಂಡು, ಕಾವ್ಯಮಾರ್ಗಿಗಳಾದ ಸಹೃದಯರಿಗೆ ಭಕ್ತಿ-ಮೇರುವಿನ ಔನ್ನತ್ಯವನ್ನು ತೋರುವಂತೆಯೂ ಮತ್ತು ಉಪಾಸನಾ-ಲಕ್ಷಣಗಳನ್ನೊಳಕೊಂಡು, ಭಕ್ತಿಮಾರ್ಗಿಗಳಾದ ಭಜಕರಿಗೆ ಕಾವ್ಯರಸಸಾಗರದ

ಆಳವನ್ನು ಮುಟ್ಟಿಸುವಂತೆಯೂ ಇರುವ ಎರಡು ದೊಡ್ಡ ಮಣ್ಣಿನ ಬಿಂದಿ-ಗೆಗಳನ್ನು ಹೊರುವಂತಹ ಕಷ್ಟದ ಕೆಲಸ. ಇಂತಹ ಸಾಹಸವನ್ನು ಮಾಡಲು ಹೋಗಿ ಯಾವುದಾದರೊಂದು ಬಿಂದಿಗೆಯನ್ನು ಒಡೆದುಕೊಂಡಿರುವವರೇ ಹೆಚ್ಚು. ಅದಕ್ಕೆ ಅಪವಾದವೆಂಬಂತೆ ಹುಟ್ಟಿಬಂದ ಮಹನೀಯರ ಸಾಲಿನಲ್ಲಿ ಶ್ರೀ ವೇದಾಂತ ದೇಶಿಕಾರ್ಯರ ಹೆಸರು ಮೊದಲಿಗೆ ನಿಲ್ಲುವಂತಹುದು. ಈ ಮಹಾನುಭಾವರು ಭಕ್ತಿ-ಸಹೃದಯತೆ-ಪಾಂಡಿತ್ಯಗಳ ತ್ರಿವೇಣೀ-ಸಂಗಮವಾಗಿದ್ದಾರೆ. ಅವರ ಹಲವು ಸ್ತೋತ್ರಕಾವ್ಯಗಳಲ್ಲಿ ಗೋದಾಸ್ತುತಿಯು ಒಂದು ಅಪೂರ್ವವಾದ ಮಾಣಿಕ್ಯ. ಕಾರಣ, ಇದು ಓರ್ವ ಭಗವದ್ಭಕ್ತೆಯ ಸ್ತುತಿ. ಅದೂ ತನ್ನ ಶೃಂಗಾರೋಪಾಸನೆಯಿಂದ, ಪತಿಭಾವದಿಂದ ಭಗ-ವಂತನನ್ನು ನುತಿಸಿ ಆತನ ಪತ್ನಿಯೇ ಆದ ಗೋದಾದೇವಿಯ ಸ್ತುತಿ. ವಸ್ತುತಃ ಶೃಂಗಾರಕ್ಕೂ ಭಕ್ತಿಗೂ, ಸಾಪೇಕ್ಷತೆ-ನಿರಪೇಕ್ಷತೆಗಳ ವ್ಯತ್ಯಾಸವಷ್ಟೇ. ಹಾಗಾಗಿ ದೇಶಿಕರ ಈ ಕೃತಿಯ ವಸ್ತುವೇ ಕಾವ್ಯ ಹಾಗೂ ಸ್ತೋತ್ರ ಎರಡಕ್ಕೂ ಅನುಕೂಲಿಸುವಂತಿದೆ.

ಈಗಾಗಲೇ ಸುಮಾರು ಎಂಟು ವರ್ಷಗಳಿಂದ ಛಂದೋಬದ್ಧವಾದ ಕಾವ್ಯಕೃಷಿಯಲ್ಲಿ ತೊಡಗಿಕೊಂಡಿರುವ ನನಗೆ ಶ್ರೀಗೋದಾಸ್ತುತಿಯನ್ನು ಸಂಸ್ಕೃತದಿಂದ ಕನ್ನಡಕ್ಕೆ ಪದ್ಯಮಾಧ್ಯಮದಲ್ಲಿಯೇ ಅನುವಾದಿಸುವುದು ಸದಭಿರುಚಿಯ ಕಾವ್ಯಾಭ್ಯಾಸವೆನಿಸಿತು. ಮೂಲಸ್ತುತಿಯೂ ವಸಂತತಿಲಕಾ ಚ್ಛಂದಸ್ಸಿನಲ್ಲಿರುವುದರಿಂದ, ಇದನ್ನು ಹಳಗನ್ನಡದ ವೃತ್ತಗಳಿಗೇ ಅಳವಡಿಸಿ ಅನುವಾದಿಸುವುದು ಉಚಿತವೆನಿಸಿ ಅನುವಾದಕಾರ್ಯಕ್ಕೆ ಮೊದಲುಮಾಡಿದ್ದೆ. ಇಪ್ಪತ್ತೆಂಟರಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚು ಪದ್ಯಗಳು ಪೂರ್ಣವಾಗಿದ್ದುವು. ಆದರೆ, ಮತ್ತೇಭವಿಕ್ರೀಡಿತದಂತಹ ದೊಡ್ಡ ಗಾತ್ರದ ಛಂದಸ್ಸಿನಲ್ಲಿ ಮೊದಲಿ-ಟ್ಟಿದ್ದು ವ್ಯರ್ಥಪದ-ವ್ಯರ್ಥವಿಶೇಷಣಗಳಿಗೆ ದಾರಿಯಾಗಿತ್ತು. ಅದನ್ನೋದಿ-ದವರಿಗೆ ಅತ್ತ ಮೂಲವೂ ತಿಳಿಯದೇ, ಇತ್ತ ಅನುವಾದವೂ ತಿಳಿಯದೇ ಗೋಜಲಾಗುವಂತಿತ್ತು. ಅಲ್ಲದೇ, ಕಾಲಾಂತರದಲ್ಲಿ ಆ ಪದ್ಯಗಳು ನನ್ನ ಅಜಾಗರೂಕತೆಯಿಂದ ಕಳೆದೂ ಹೋದುವು. ಈ ಎಲ್ಲ ಗೊಡವೆಗಳಾಗಿ ಸುಮಾರು ಮೂರೂವರೆ ವರ್ಷಗಳು ಕಳೆದ ಬಳಿಕ ಈ ೨೦೨೧ನೆಯ ವರ್ಷದ

ಮಧ್ಯದಲ್ಲಿ ಮತ್ತೊಮ್ಮೆ ಮೊದಲಿನಿಂದ ಅದನ್ನು ಕನ್ನಡಕ್ಕೆ ಅನುವಾದಿಸುವ ಬಯಕೆಯಾಗಿ ದಿನಕ್ಕೊಂದು ಪದ್ಯದಂತೆ ಗೋದಾಸ್ತುತಿಯನ್ನು ಕನ್ನಡಕ್ಕೆ ಅನುವಾದಿಸಲು ತೊಡಗಿಕೊಂಡೆ. ಆದರೆ ಹಿಂದಿನ ಬಾರಿಯ ತೊಡಕುಗಳ ಅನುಭವವಿದ್ದ ಕಾರಣ ಈ ಬಾರಿಯ ಅನುವಾದಕ್ಕಾಗಿ ಭಾಮಿನೀ ಷಟ್ಪದಿ-ಯನ್ನು ಆರಿಸಿಕೊಂಡೆ - ಅದು ಮಾತ್ರಾಚ್ಛಂದಸ್ಸಾಗಿರುವುದರಿಂದ ವರ್ಣ-ವೃತ್ತಗಳ ಬಿಗುವಿರದೆ, ಒಂದಷ್ಟು ನನಗೂ ಕೈಕಾಲಾಡಿಸಲು ಅನುವು ಮಾಡಿಕೊಡುವುದೆಂಬ ಕಾರಣದಿಂದಾಗಿ.

ಇದನ್ನು ನಾನು ಅನುವಾದಿಸಿದೆ ಎನ್ನುವುದಕ್ಕಿಂತಲೂ, ಇದು ನನ್ನಿಂದ ಬರೆಯಿಸಲ್ಪಟ್ಟಿತು ಎನ್ನುವುದು ಹೆಚ್ಚು ಸೂಕ್ತ. ಇಲ್ಲದಿದ್ದರೆ, ಶತಾವಧಾನಿ ಡಾ॥ ರಾ. ಗಣೇಶರಂತಹ ಪಂಡಿತೋತ್ತಮರ ಸೂಜಿಗಣ್ಣಿನ ಮೂಲಕ ಕೇವಲ ಒಂದೆರಡು ಮುದ್ರಣದೋಷಗಳೊಡನೆ ಹಾದುಬಂದ ಈ ಅನು-ವಾದದ ಕೃತಿಯು ಖಂಡಿತವಾಗಿಯೂ ನನ್ನಂತಹ ಮನುಷ್ಯಮಾತ್ರನ ಪ್ರಯತ್ನವಾಗಿರಲಿಕ್ಕೆ ಸಾಧ್ಯವಿಲ್ಲವೆಂಬುದು ನನ್ನ ಅಚಲವಾದ ನಂಬಿಕೆ. ಈ ಕೃತಿಯ ಅನುವಾದದ ಗುಣಮಟ್ಟವನ್ನು ಮೆಚ್ಚಿಕೊಂಡು ಮನಸಾ ಹಾರೈಸಿ, ಶುಭವನ್ನು ಕೋರಿದ, ಹಾಗೂ ಕಳೆದ ಎಂಟು ವರ್ಷಗಳಿಂದ ತಮ್ಮ 'ಪದ್ಯಪಾನ'ದ ಗರಡಿಯಲ್ಲಿ ನನ್ನನ್ನು ಪಳಗಿಸುತ್ತಿರುವ ಶತಾವಧಾನಿ ಡಾ॥ ರಾ. ಗಣೇಶರ ಆ ಮಹದೌದಾರ್ಯಕ್ಕೆ, ಕೃತಿಯನ್ನು ಮೆಚ್ಚಿಕೊಂಡು ಅಭಿನಂದನೆಗಳನ್ನು ತಿಳಿಸಿದ ಇತರೆ ಅನೇಕ ಸಹೃದಯಮಿತ್ರರಿಗೆ, ಹಾಗೂ ಇದನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ಸುತರಾಂ ಒಪ್ಪಿರದಿದ್ದ ನನ್ನನ್ನು ತಾನೇ ಅಚ್ಚುಮಾಡಿಕೊಡುವೆನೆಂದು ಹೇಳಿ ತಮ್ಮ ನಲ್ನುಡಿಗಳಿಂದ ಒಪ್ಪಿಸಿ ಈ ಕೃತಿಯನ್ನು ಅಚ್ಚುಮಾಡಿಕೊಡುತ್ತಿರುವ ಪ್ರೀತಿಯ "ಹರಿ ಮಾಮಾ", ಹರಿ ರವಿಕುಮಾರ್ ಅವರಿಗೆ, ಈ ಸಂದರ್ಭದಲ್ಲಿ ನನ್ನ ಕೈಯೆತ್ತಿ ಹಣೆಮುಟ್ಟಿದ ನಮನಗಳು.

ಗೋದಾಸ್ತುತಿಯ ನಾಯಿಕೆಯಾಗಲೀ, ಕೃತಿಕಾರರಾಗಲೀ ತಮಿಳಿನವರು. ಅಂತಹ ಈ ಸ್ತುತಿಕಾವ್ಯಕಾವೇರಿಯು ಈ ಅನುವಾದದ ನದೀಪಾತ್ರದ ಮೂಲಕ ತಮಿಳುನಾಡಿನಿಂದ ಕರ್ಣಾಟಕದೆಡೆಗೆ ಪ್ರವಹಿಸಿ, ಸಹೃದಯ-

ಭಕ್ತರಾದ ವಾಚಕರನ್ನು ತನ್ನೊಡನೆ ಸೆಳೆದುಕೊಂಡು ಆನಂದದ ಬ್ರಹ್ಮಗಿರಿಯ ಎತ್ತರಕ್ಕೊಯ್ದು ತಲುಪಿಸಲಿ ಎಂದು ಬಯಸುತ್ತಾ ಪದ್ಯರೂಪದ ಕೃತಜ್ಞತೆ-ಗಳೊಡನೆ ಕೈಮುಗಿಯುತ್ತೇನೆ.

ಒರೆಯನರುಹಿದ ಹಿರಿಯರೆಲ್ಲರಿ-
ಗೊರೆಯ ನಿಲಿಸಿದ ಶಾರದೆಗೆ ಮೇ-
ಣೊರೆಯ ತಿದ್ದಿದ ರಾಗಣೇಶರಿಗೀ ವರಸ್ತುತಿಯ।
ಬರೆದ ದೇಶಿಕರಿಂಗೆ ಮುಂದಣ
ಬರೆಯಿಸಿದ ಗೋದಾಂಬಿಕೆಗೆ ನಾ
ಕರವ ಮುಗಿವೆನು ಕೃತಿಯನಿವರುಗಳುಡಿಗೆ ಹಾಯ್ಕುತಲಿ॥

ಸುದರ್ಶನ್ ಮುರಳೀಧರ
ಬೆಂಗಳೂರು



ಮೂಲ

ಶ್ರೀವಿಷ್ಣುಚಿತ್ತಕುಲನಂದನಕಲ್ಪವಲ್ಲೀಂ
ಶ್ರೀರಂಗರಾಜಹರಿಚಂದನಯೋಗದೃಶ್ಯಾಮ್ ।
ಸಾಕ್ಷಾತ್ಕ್ಷಮಾಂ ಕರುಣಯಾ ಕಮಲಾಮಿವಾನ್ಯಾಂ
ಗೋದಾಮನನ್ಯಶರಣಃ ಶರಣಂ ಪ್ರಪದ್ಯೇ ॥

ಅನುವಾದ

ಹರಿಯೊಳದ್ದಪ ವಿಷ್ಣುಚಿತ್ತರ
ಮೆರೆವ ಕುಲನಂದನದೆ ಬೆಳೆದಾ-
ಸರೆಗೆ ರಂಗನೆನಿಪ್ಪ ಚಂದನತರುವ ತಬ್ಬುತಲಿ ।
ನೆರೆದು ಹಬ್ಬಿದ ಕಲ್ಪವಲ್ಲಿಯ,
ತಿರೆಯ, ಕರುಣದೊಳಪರಲಕ್ಷ್ಮಿಯ,
ಶರಣೊಳಿನ್ನಿಲ್ಲೆನುವ ಗೋದೆಯ ಪದಯುಗವನೊಗುವೆ ॥

# ೨

ಮೂಲ

ವೈದೇಶಿಕಃ ಶ್ರುತಿಗಿರಾಮಪಿ ಭೂಯಸೀನಾಂ
ವರ್ಣೇಷು ಮಾತಿ ಮಹಿಮಾ ನ ಹಿ ಮಾದೃಶಾಂ ತೇ।
ಇತ್ಥಂ ವಿದಂತಮಪಿ ಮಾಂ ಸಹಸೈವ ಗೋದೇ
ಮೌನದ್ರುಹೋ ಮುಖರಯಂತಿ ಗುಣಾಸ್ತ್ವದೀಯಾಃ॥

ಅನುವಾದ

ಹೊರಗಣಾಗಿಹ ಮಹಿಮೆಯಾಗಮ-
ದೊರೆಗಳಿಂಗದು ನಿನ್ನದೆನಲಳ-
ವಿರದು ನಿನ್ನನು ಬಣ್ಣಿಪೊಡನೆನ್ನಂತಹವರಿಗೆನೆ।
ಇರಲು ಹಲ್ಗಳೆದನೊಲು ಮಿಗೆ ಬಾ-
ಯ್ಬಿರಿದು ನಿನ್ನ ಗುಣಂಗಳೆನ್ನಿಂ-
ದುರವಣಿಸಿಹವು ಗೋದೆ! ಮೌನಕೆ ಹಗೆಗಳಾಗುತಲಿ॥

೩

ಮೂಲ

ತ್ವಚ್ಛ್ರೇಯಸಃ ಶ್ರವಣಯೋರಮೃತಾಯಮಾನಾಂ
ತುಲ್ಯಾಂ ತ್ವದೀಯಮಣಿನೂಪುರಶಿಂಜಿತಾನಾಮ್ ।
ಗೋದೇ ತ್ವಮೇವ ಜನನಿ ತ್ವದಭಿಷ್ಟವಾರ್ಹಾಂ
ವಾಚಂ ಪ್ರಸನ್ನಮಧುರಾಂ ಮಮ ಸಂವಿಧೇಹಿ ॥

ಅನುವಾದ

ನಿನ್ನಿನಿಯನಾ ಕಿವಿಗೆ ಸೊದೆಯಹ
ನಿನ್ನ ಕಾಲಂದುಗೆಯ ಪಾಂಗಿನ
ಸನ್ನುತಿಗೆ ನಿನಗೊಪ್ಪವಾಗಿಹ ಚೆನ್ನಿನುಲಿಗಳನು ।
ಬಿನ್ನಹಂಗೈದಪೆನು ತಾಯೆನ-
ಗಿನ್ನು ನೀನೊಲಿದೀವುದಾಗಿ ಪ್ರ-
ಸನ್ನಮಧುರವೆನಿಪ್ಪ ನುಡಿಗಳನವ್ವೆ! ಮಾಲ್ಯದೆಯೆ! ॥

## ೪

ಮೂಲ

ಕೃಷ್ಣಾನ್ವಯೇನ ದಧತೀಂ ಯಮುನಾನುಭಾವಂ
ತೀರ್ಥೈರ್ಯಥಾವದವಗಾಹ್ಯ ಸರಸ್ವತೀಂ ತೇ ।
ಗೋದೇ ವಿಕಸ್ವರಧಿಯಾಂ ಭವತೀ ಕಟಾಕ್ಷಾತ್
ವಾಚಃ ಸ್ಫುರಂತಿ ಮಕರಂದಮುಚಃ ಕವೀನಾಮ್ ॥

ಅನುವಾದ

ಬೆಸೆಸೆ ಕೃಷ್ಣನೊಡಾಯ್ತು ನಿನ್ನಿಂ-
ದೆಸೆವ ವಾಣಿಯು ತಾನು ಯಮುನೆಯೊ-
ಳೊಸಗುವನುಭಾವವನು ನೀಡಲು ತೀರ್ಥನಿಕರದೊಳು ।
ಮಿಸುವ ಬುದ್ಧಿಯ ಕವಿಗಳೊರೆಗಳ-
ನೊಸೆಯೆ ಜೇನೊಲು ಸುರಿವುವಲೆ ತಾ-
ವುಸುರುವೊಡೆ ನಿನ್ನೋರೆನೋಟದ ಬಲುಹಿನಿಂ ಗೋದೆ! ॥

ಶ್ರೀ

ಮೂಲ

ಅಸ್ಮಾದೃಶಾಮಪಕೃತೌ ಚಿರದೀಕ್ಷಿತಾನಾಮ್
ಅಹ್ನಾಯ ದೇವಿ ದಯತೇ ಯದಸೌ ಮುಕುಂದಃ।
ತನ್ನಿಶ್ಚಿತಂ ನಿಯಮಿತಸ್ತವ ಮೌಲಿದಾಮ್ನಾ
ತಂತ್ರೀನಿನಾದಮಧುರೈಶ್ಚ ಗಿರಾಂ ನಿಗುಮ್ಫೈಃ॥

ಅನುವಾದ

ಎಮ್ಮೊಲಪಕೃತಿಯೆಂಬ ನೇಮವ
ನೆಮ್ಮಿದವರನು ದಯೆಯೊಳೊಲಿವನು
ಸಮ್ಮತಿಸುತೆ ಮುಕುಂದನೆನುವೊಡೆ ದಿಟದೊಳಿಂತಿಹುದೌ।
ಕಮ್ಮಗೋಲನ ಪಿತನು ಕೋಪಿಸ-
ದೊಮ್ಮಿನಿಹನಲೆ ಕಟ್ಟಿ ಕೊಂಡೆಯ
ಕಮ್ಮಿನೊಳು ಮೇಣ್ ವೀಣೆಗೆಣೆಯಹ ನುಡಿಗಳೊಳು ನಿನ್ನಾ॥

೬

ಮೂಲ

ಶೋಣಾಧರೇऽಪಿ ಕುಚಯೋರಪಿ ತುಂಗಭದ್ರಾ
ವಾಚಾಂ ಪ್ರವಾಹನಿವಹೇऽಪಿ ಸರಸ್ವತೀ ತ್ವಮ್ ।
ಅಪ್ರಾಕೃತೈರಪಿ ರಸೈರ್ವಿರಜಾ ಸ್ವಭಾವಾತ್
ಗೋದಾऽಪಿ ದೇವಿ ಕಮಿತುರ್ನನು ನರ್ಮದಾऽಸಿ ॥

ಅನುವಾದ

ಪೊಳೆವ ತುಟಿಯಲಿ ಶೋಣೆಯೋ ನಿಡು-
ಮೊಲೆಗಳಿಂದಲಿ ತುಂಗಭದ್ರೆಯೊ
ಸೆಳೆವ ನುಡಿನೆರೆಯಲಿ ಸರಸ್ವತಿಯಹೆಯೊ ಜಗದೊಳಗೆ ।
ಸಲಿಲೆ ವಿರಜೆಯೊ ದಿವ್ಯರಸದೊಳು
ನೆಲೆಗೆ ಹೆಸರೊಳು ಗೋದೆಯಾದೊಡ-
ನೊಲಿಸಿದಿನಿಯಗೆ ನರ್ಮದೆಯೊ ನೀ ಬಿನದದಾಟದೊಳು ॥

# ೭

ಮೂಲ

ವಲ್ಮೀಕತಃ ಶ್ರವಣತೋ ವಸುಧಾತ್ಮನಸ್ತೇ
ಜಾತೋ ಬಭೂವ ಸ ಮುನಿಃ ಕವಿಸಾರ್ವಭೌಮಃ ।
ಗೋದೇ ಕಿಮದ್ಭುತಮಿದಂ ಯದಮೀ ಸ್ವದಂತೇ
ವಕ್ತ್ರಾರವಿಂದಮಕರಂದನಿಭಾಃ ಪ್ರಬಂಧಾಃ ॥

ಅನುವಾದ

ತಿರೆಯ ರೂಹಿನೊಳಿರಲು ಹುತ್ತಿನ
ಸರಣಿ ನಿನ್ನಯ ಕಿವಿಗಳೆಂಬರು
ಹೊರಗೆ ತಾನದರಿಂದೆ ಕಬ್ಬಿಗರರಸನೈದುವೊಡೆ ।
ವರದೆ! ನಿನ್ನುಲಿಪೊಸರೆ ಮೊಗದಾ-
ವರೆಯೊಳಿಂದಲಿ ಜೇನ ಸವಿಯದ-
ಕಿರುವೊಡೇನಚ್ಚರಿಯೆ ನಿನ್ನ ಪ್ರಬಂಧರಾಶಿಗೆಲೌ? ॥

## ೮

ಮೂಲ

ಭೋಕ್ತುಂ ತವ ಪ್ರಿಯತಮಂ ಭವತೀವ ಗೋದೇ
ಭಕ್ತಿಂ ನಿಜಾಂ ಪ್ರಣಯಭಾವನಯಾ ಗೃಣಂತಃ ।
ಉಚ್ಚಾವಚೈರ್ವಿರಹಸಂಗಮಜೈರುದಂತೈಃ
ಶೃಂಗಾರಯಂತಿ ಹೃದಯಂ ಗುರವಸ್ತ್ವದೀಯಾಃ ॥

ಅನುವಾದ

ಕೋರಿ ನಿನ್ನಯ ಕಾಂತನನು ಬಳಿ-
ಸಾರಿ ನಿನ್ನೊಲು ರಮಿಸಬಯಸುತ-
ಲೇರಿಸುತೆ ನಿಜಭಕ್ತಿಯನು ತತ್ಪ್ರಣಯಭಾವನೆಗೆ ।
ಸೇರುವೆಯ ಬೇರಾಗುವೆಯ ತೆರೆ-
ಯೇರಿಳಿತದಲಿ ಹೃದಯವನೆ ಸಿಂ-
ಗಾರಗೊಳಿಸಿಹರವ್ವೆ! ನಿನ್ನಯ ಹಿರಿಯರೊಡಗೂಡಿ ॥

## ೬

ಮೂಲ

ಮಾತಃ ಸಮುತ್ಥಿತವತೀಮಧಿವಿಷ್ಣುಚಿತ್ತಂ
ವಿಶ್ವೋಪಜೀವ್ಯಮಮೃತಂ ವಚಸಾ ದುಹಾನಾಮ್ ।
ತಾಪಚ್ಛಿದಂ ಹಿಮರುಚೇರಿವ ಮೂರ್ತಿಮನ್ಯಾಂ
ಸಂತಃ ಪಯೋಧಿದುಹಿತುಃ ಸಹಜಾಂ ವಿದುಸ್ತ್ವಾಮ್ ॥

ಅನುವಾದ

ಜನನದೊಳು ನೀ ವಿಷ್ಣುಚಿತ್ತಜೆ-
ಯೆನಿಸಿ ಮಾತುಗಳಿಂದೆ ಸುರಿಸುತ-
ಲುಣಿಸಿ ಲೋಕವ ನಿಲಿಪ ಸೊದೆಯನು ಪರಮಕರುಣದೊಳು ।
ತಣಿಸೆ ಬೇಗೆಯ ಸಂದ ಹಿಮಕರ-
ಗೆಣೆಯು ನೀನಿರೆ ಲಕುಮಿಯೊಡಹು
ಟ್ಟೆನುತೆ ನಿನ್ನನು ಸಜ್ಜನರು ತಿಳಿದಿಹುದು ಸೋಜಿಗವೆ? ॥

## ೧೦

ಮೂಲ

ತಾತಸ್ತು ತೇ ಮಧುಭಿದಃ ಸ್ತುತಿಲೇಶವಶ್ಯಾತ್
ಕರ್ಣಾಮೃತೈಃ ಸ್ತುತಿಶತೈರನವಾಪ್ತಪೂರ್ವಮ್ ।
ತ್ವನ್ಮೌಲಿಗಂಧಸುಭಗಾಮುಪಹೃತ್ಯ ಮಾಲಾಂ
ಲೇಭೇ ಮಹತ್ತರಪದಾನುಗುಣಂ ಪ್ರಸಾದಮ್ ॥

ಅನುವಾದ

ನುತಿಪೊಡಲ್ಪಸ್ತುತಿಗೆ ಬೀಳ್ವ-
ಚ್ಯುತನ ಮಧುವೈರಿಯ ಹಸಾದವ
ಪಿತನು ಪಡೆಯದೆ ಹೋದನೌ ನೂರಾರು ಶಂಸೆಗಳಿಂ ।
ಗತಿಯೊಳವನದನಾಂತನೌ ಶ್ರೀ-
ಪತಿಗೆ ನಿನ್ನಯ ಕುರುಳ ಕಂಪನು
ವಿತರಿಪಾ ಸುಮಮಾಲಿಕೆಯ ಕಾಣಿಕೆಯನಿತ್ತೊಡನೆ ॥



ಮೂಲ

ದಿಗ್ದಕ್ಷಿಣಾಽಪಿ ಪರಿಪಕ್ತ್ರಿಮಪುಣ್ಯಲಭ್ಯಾತ್
ಸರ್ವೋತ್ತರಾ ಭವತಿ ದೇವಿ ತವಾವತಾರಾತ್ ।
ಯತ್ರೈವ ರಂಗಪತಿನಾ ಬಹುಮಾನಪೂರ್ವಂ
ನಿದ್ರಾಲುನಾಪಿ ನಿಯತಂ ನಿಹಿತಾಃ ಕಟಾಕ್ಷಾಃ ॥

ಅನುವಾದ

ದೇವಿ! ಪುಣ್ಯದ ಪಾಕವೆನಿಪ ತ-
ವಾವತಾರದೊಳಾಯ್ತು ದಕ್ಷಿಣ-
ಭೂವಲಯವದು ನೋಡೆ ಸರ್ವೋತ್ತರವು ತಾನದರಿಂ ।
ದೇವ ರಂಗೇಶನು ಕಟಾಕ್ಷವ
ಕಾವ ಕಜ್ಜದೆ ನೆಟ್ಟಿಹನು ನಿ-
ದ್ರಾವಕಾಶದೊಳಿದ್ದೊಡತ್ತಲೆ ಮಾನಿಸುವ ನೆವದಿ ॥

# ೧೨

ಮೂಲ

ಪ್ರಾಯೇಣ ದೇವಿ ಭವತೀವ್ಯಪದೇಶಯೋಗಾತ್
ಗೋದಾವರೀ ಜಗದಿದಂ ಪಯಸಾ ಪುನೀತೇ ।
ಯಸ್ಯಾಂ ಸಮೇತ್ಯ ಸಮಯೇಷು ಚಿರಂ ನಿವಾಸಾತ್
ಭಾಗೀರಥೀಪ್ರಭೃತಯೋಽಪಿ ಭವಂತಿ ಪುಣ್ಯಾಃ ॥

ಅನುವಾದ

ಬರಿದೆ ನಿನ್ನಯ ಹೆಸರೆ ಗೋದಾ-
ವರಿಗೆ ಸಂದೊಡೆ ಪೂತಗೊಳಿಸಿತು
ಧರೆಯನಾ ನದಿ; ವಾಸಿಸುತೆ ಚಿರಕಾಲವದರೊಳಗೆ ।
ಸುರಸರಿತೆ ಮೊದಲಾದ ಕುಲನಿ-
ರ್ಝರಿಣಿಯರೆ ಮಿಂದೆದ್ದು ಮಿಗೆ ಶೇ-
ಖರಿಸೆ ಪುಣ್ಯವ ಸಲುವರೌ ನಿರ್ಮಲೆಯರಾಗುತಲಿ ॥

## ೧೩

ಮೂಲ

ನಾಗೇಶಯಃ ಸುತನು ಪಕ್ಷಿರಥಃ ಕಥಂ ತೇ
ಜಾತಃ ಸ್ವಯಂವರಪತಿಃ ಪುರುಷಃ ಪುರಾಣಃ ।
ಏವಂ ವಿಧಾಃ ಸಮುಚಿತಂ ಪ್ರಣಯಂ ಭವತ್ಯಾಃ
ಸಂದರ್ಶಯಂತಿ ಪರಿಹಾಸಗಿರಃ ಸಖೀನಾಮ್ ॥

ಅನುವಾದ

ಎಳೆಯ ಮೆಯ್ಯಳೆ! ಹಾವ ಹಾಸುಗೆ-
ಯೊಳಗೆ ಪವಡಿಪ ಹಕ್ಕಿದೇರನ
ಹಳೆಯ ಜವ್ವನಿಗನನು ನೀ ವರಿಸಿಹುದದೆಂತೆನುತ ।
ಕೆಳದಿಯರು ನಿನ್ನವರು ಬಹುವಿಧ-
ದೊಳಗೆ ಬಿನದವನಾಡಿ ಮಾತನು
ಬೆಳೆಸಿಹರು ನಿನ್ನೊಲವಿನಂದವ ನಿನಗೆ ತೋರುತಲಿ ॥

## ೧೪

ಮೂಲ

ತ್ವದ್ಭುಕ್ತಮಾಲ್ಯಸುರಭೀಕೃತಚಾರುಮೌಲೇಃ
ಹಿತ್ವಾ ಭುಜಾಂತರಗತಾಮಪಿ ವೈಜಯಂತೀಮ್ ।
ಪತ್ಯುಸ್ತವೇಶ್ವರಿ ಮಿಥಃ ಪ್ರತಿಘಾತಲೋಲಾಃ
ಬರ್ಹಾತಪತ್ರರುಚಿಮಾರಚಯಂತಿ ಭೃಂಗಾಃ ॥

ಅನುವಾದ

ಮುಡಿಯೆ ನಿನ್ನಯ ಕೊಂಡೆಗಂಪನು
ಪಡೆದ ಮಾಲೆಯ ಶಿರದೆ ಸಲೆ ನಿ-
ನ್ನೊಡೆಯನಾತನ ಭುಜದೆ ಮೆರೆದಿಹ ವೈಜಯಂತಿಯನು ।
ಬಿಡುತಲೇರುತ ತಮ್ಮತಮ್ಮೊಳು
ಬಡಿದು ಬಂಡುಣಿವಿಂಡದೋ ಗರಿ-
ಗೊಡೆಯೊಲಾತನ ಮುಡಿಗೆ ಕಾತರಿಸುತಲಿ ಸಂದಿಹವೌ ॥

## ೧೫

ಮೂಲ

ಆಮೋದವತ್ಯಪಿ ಸದಾ ಹೃದಯಂಗಮಾಽಪಿ
ರಾಗಾನ್ವಿತಾಽಪಿ ಲಲಿತಾಽಪಿ ಗುಣೋತ್ತರಾಽಪಿ ।
ಮೌಳಿಸ್ರಜಾ ತವ ಮುಕುಂದಕಿರೀಟಭಾಜಾ
ಗೋದೇ ಭವತ್ಯಧರಿತಾ ಖಲು ವೈಜಯಂತೀ ॥

ಅನುವಾದ

ಮೆಚ್ಚುಗೊಳವೊಡದೇನು? ಹೃದಯ-
ಕ್ಕಚ್ಚುಗೊಳುವೊಡದೇನು? ರಾಗವ-
ನೆಚ್ಚಿಕೊಳೆ ಲಾಲಿತ್ಯವಿರೆ ಗುಣದೊಳಗೆ ಹೆಚ್ಚಿರಲೇಂ? ।
ಪೆಚ್ಚುಮೊಗದೊಳು ವೈಜಯಂತಿಯು
ನಿಚ್ಚ ಕೆಳಗುಳಿದುದು, ಮುಕುಂದನೆ
ನೆಚ್ಚಿ, ಗೋದೆಯೆ! ನಿನ್ನ ಮಾಲೆಯ ಮಕುಟಕೇರಿಸಿರೆ ॥

## ೧೬

ಮೂಲ

ತ್ವನ್ಮೌಲಿದಾಮನಿ ವಿಭೋಃ ಶಿರಸಾ ಗೃಹೀತೇ
ಸ್ವಚ್ಛಂದಕಲ್ಪಿತಸಪೀತಿರಸಪ್ರಮೋದಾಃ।
ಮಂಜುಸ್ವನಾ ಮಧುಲಿಹೋ ವಿದಧುಃ ಸ್ವಯಂ ತೇ
ಸ್ವಾಯಂವರಂ ಕಮಪಿ ಮಂಗಳತೂರ್ಯಘೋಷಮ್ ॥

ಅನುವಾದ

ಶಿರಕೆ ಸೂಡಲು ನಿನ್ನ ಕೊಂಡೆಯ-
ಲರಿನ ದಂಡೆಯ ವಿಭುವು, ಸಂದಣಿ
ನೆರೆದುದೌ ಸ್ವಚ್ಛಂದಮೋದದೆ ಮಧುವ ಹೀರುತಲಿ।
ಭರದೆ ತುಂಬಿಗಳು ಸ್ವಯಂವರ-
ಕೆರೆವ ಮಂಗಳತೂರ್ಯಘೋಷವ
ಮೊರೆಯೆ ನಿಂದುವು ತಮ್ಮ ಝೇಂಕೃತಿಯಿಂದೆ ಹರುಷದಲಿ ॥

## ೧೭

ಮೂಲ

ವಿಶ್ವಾಯಮಾನರಜಸಾ ಕಮಲೇನ ನಾಭೌ
ವಕ್ಷಃಸ್ಥಲೇ ಚ ಕಮಲಾಸ್ತನಚಂದನೇನ ।
ಆಮೋದಿತೋಽಪಿ ನಿಗಮೈರ್ವಿಭುರಂಘ್ರಿಯುಗ್ಮೇ
ಧತ್ತೇ ನತೇನ ಶಿರಸಾ ತವ ಮೌಲಿಮಾಲಾಮ್ ॥

ಅನುವಾದ

ಹೊಕ್ಕುಳಿನ ತಾವರೆಯ ಹುಡಿ ತಾ-
ನೊಕ್ಕಣಿಸುತಿರೆ ಜಗವನೆನೆ ಬಲು
ಚೊಕ್ಕವಹ ಸಿರಿಯೆದೆಯ ಗಂಧವ ಹೊತ್ತ ವಕ್ಷವಿರೆ ।
ಒಕ್ಕೊರಲಿನಲಿ ವಿಭುವ ಮೆಚ್ಚಿಸೆ
ಮಿಕ್ಕ ವೇದಂಗಳು ಭಜಿಸಲೇ-
ನಕ್ಕಜವೊ ತಲೆವಾಗಿಹನು ತವ ಮೌಳಿಮಾಲಿಕೆಗೆ ॥

## ೧೮

ಮೂಲ

ಚೂಡಾಪದೇನ ಪರಿಗೃಹ್ಯ ತವೋತ್ತರೀಯಂ
ಮಾಲಾಮಪಿ ತ್ವದಲಕೈರಧಿವಾಸ್ಯ ದತ್ತಾಮ್ ।
ಪ್ರಾಯೇಣ ರಂಗಪತಿರೇಷ ಬಿಭರ್ತಿ ಗೋದೇ
ಸೌಭಾಗ್ಯಸಂಪದಭಿಷೇಕಮಹಾಧಿಕಾರಮ್ ॥

ಅನುವಾದ

ಕಟ್ಟಿ ತನ್ನಯ ಮಕುಟಕೆನೆ ನೀ
ಕೊಟ್ಟ ಮೇಗಣದುತ್ತರೀಯವ-
ನಿಟ್ಟು ನಿನ್ನಯ ಕುರುಳ ಸೋಕಿಹ ಮಾಲಿಕೆಯ ಶಿರದಿ ।
ಒಟ್ಟಯಿಸುತಲಿ ರಂಗನಾಥಗೆ
ಗಿಟ್ಟಿದುದೊ ಸಂಪತ್ತನೀಯುವ
ಪಟ್ಟವದು ಸೌಭಾಗ್ಯದೊಡೆ ತಾ ಬೇಡುವರಿಗೆಲ್ಲ ॥

## ೧೯

### ಮೂಲ

ತುಂಗೈರಕೃತ್ರಿಮಗಿರಃ ಸ್ವಯಮುತ್ತಮಾಂಗೈಃ
ಯಂ ಸರ್ವಗಂಧ ಇತಿ ಸಾದರಮುದ್ವಹಂತಿ ।
ಆಮೋದಮನ್ಯಮಧಿಗಚ್ಛತಿ ಮಾಲಿಕಾಭಿಃ
ಸೋಽಪಿ ತ್ವದೀಯಕುಟಿಲಾಲಕವಾಸಿತಾಭಿಃ ॥

### ಅನುವಾದ

ಏರುತಲೆಗಳೊಳೇರುದನಿಯೊಳ-
ಪೌರುಷೇಯವೆನಿಪ್ಪ ನುಡಿಗಳ-
ವಾರನಾದರದಿಂದಲೆನುವುವೊ ಸರ್ವಗಂಧನೆನೆ ।
ಬೇರೆಯಾಮೋದವನೆ ಹೊಗುವನು
ಸೇರೆ ನಿನ್ನಯ ಸುರುಳುಗುರುಳಿಂ-
ಗೇರಿದಗ್ಗದ ಕಂಪುವಡೆದಿಹ ಮಾಲೆಯಾತನಿಗೆ ॥

# ೨೦

ಮೂಲ

ಧನ್ಯೇ ಸಮಸ್ತಜಗತಾಂ ಪಿತುರುತ್ತಮಾಂಗೇ
ತ್ವನ್ಮೌಲಿಮಾಲ್ಯಭರಸಂಭರಣೇನ ಭೂಯಃ ।
ಇಂದೀವರಸ್ರಜಮಿವಾದಧತಿ ತ್ವದೀಯಾ-
ನ್ಯಾಕೇಕರಾಣಿ ಬಹುಮಾನವಿಲೋಕಿತಾನಿ ॥

ಅನುವಾದ

ಸುತ್ತೆ ನಿನ್ನಯ ಮೌಳಿಮಾಲೆಯ-
ನುತ್ತಮಾಂಗವು ಜಗದ ಪಿತನದು
ಮತ್ತೆ ಧನ್ಯತೆಯೊಂದಿತೌ, ಕನ್ನೈದಿಲೆಯ ದಂಡೆ ।
ನೆತ್ತಿಯಾತನದಡರುವಂದದಿ
ಬಿತ್ತರಿಸೆ ನಿನ್ನೋರೆಗಂಗಳ-
ವೆತ್ತರಿಸಿ ದಿಟ್ಟಿಪೊಡನಾತನ ಶಿರವ ಮಾನಿಸುತ ॥

## ೨೧

ಮೂಲ

ರಂಗೇಶ್ವರಸ್ಯ ತವ ಚ ಪ್ರಣಯಾನುಬಂಧಾತ್
ಅನ್ಯೋನ್ಯಮಾಲ್ಯಪರಿವೃತ್ತಿಮಭಿಷ್ಟುವಂತಃ ।
ವಾಚಾಲಯಂತಿ ವಸುಧೇ ರಸಿಕಾಸ್ತ್ರಿಲೋಕೀಂ
ನ್ಯೂನಾಧಿಕತ್ವಸಮತಾವಿಷಯೈರ್ವಿವಾದೈಃ ॥

ಅನುವಾದ

ನಿನಗೆ ರಂಗೇಶನೊಳು ಸಂದಿಹ
ಪ್ರಣಯಬಂಧದೆ ತೊಡಿಸೆ ಮಾಲೆಯ-
ನನುನಯದೆ ನೀನವಗೆ ನಿನಗಾತನೆನೆ ಮೂಜಗದ ।
ವಿನುತಿಪೆಲ್ಲರು ರಸಿಕಸಜ್ಜನ-
ರೆನಿಪ ವಾಚಾಳರು ವಿವಾದದೊ-
ಳೆಣಿಸಿಹರು ನಿಮ್ಮಿಬ್ಬರಗ್ಗಳ-ಕೊರತೆ-ಸಾಟಿಗಳ ॥

# ೨೨

ಮೂಲ

ದೂರ್ವಾದಲಪ್ರತಿಮಯಾ ತವ ದೇಹಕಾಂತ್ಯಾ
ಗೋರೋಚನಾರುಚಿರಯಾ ಚ ತಥೇಂದಿರಾಯಾಃ ।
ಆಸೀದನುಜ್ಝಿತಶಿಖಾವಲಕಂಠಶೋಭಂ
ಮಾಂಗಲ್ಯದಂ ಪ್ರಣಮತಾಂ ಮಧುವೈರಿಗಾತ್ರಮ್ ॥

ಅನುವಾದ

ಗರಿಕೆವಸಿರಿನ ನಿನ್ನ ಕಾಂತಿಯು
ನೆರೆದು ಗೋರೋಚನದ ಸೊಬಗಿಹ
ಸಿರಿಯ ದೇವಿಯ ಮೈಯ ಹೊಳಪನು ಸೇರುತದರೊಡನೆ ।
ಬೆರೆತು ಸೋಗೆಯ ಕೊರಳಿನಂತಾ-
ಯ್ತೆರಗುವರಿಗೊಳ್ಳಿತನೆ ನೀಡುವ
ಹರಿಯ ಕಾಯವು ಶೋಭಿಸುತೆ ತಾನಾಗಳೊಪ್ಪದೊಳು ॥

# ೨೩

ಮೂಲ

ಅರ್ಚ್ಯಂ ಸಮರ್ಚ್ಯ ನಿಯಮೈರ್ನಿಗಮಪ್ರಸೂನೈಃ
ನಾಥಂ ತ್ವಯಾ ಕಮಲಯಾ ಚ ಸಮೇಯಿವಾಂಸಮ್ ।
ಮಾತಶ್ಚಿರಂ ನಿರವಿಶನ್ನಿಜಮಾಧಿರಾಜ್ಯಂ
ಮಾನ್ಯಾ ಮನುಪ್ರಭೃತಯೋಽಪಿ ಮಹೀಕ್ಷಿತಸ್ತೇ ॥

ಅನುವಾದ

ವೇದಸುಮತತಿಯಿಂದಲರ್ಚಿಸು-
ತಾದಿಯೊಳು ನಿಯಮಂಗಳಿಂದಲಿ
ಗೋದೆ! ನಿನ್ನೊಡೆ ಲಕುಮಿಯೊಡನಿಹ ನಾಥನನು ತಾವು ।
ಮೇದಿನಿಯೊಳಧಿರಾಜರೆನಿಸುತ
ಮೋದವಡೆದರು ಮನುವಿನಿಂ ಮೊದ-
ಲಾದ ಭೂಪರು ಸರ್ವದಾ ಬಹುಮಾನ್ಯರೆನಿಸುತಲಿ ॥

# ೨೪

ಮೂಲ

ಆರ್ದ್ರಾಪರಾಧಿನಿ ಜನೇಽಪ್ಯಭಿರಕ್ಷಣಾರ್ಥಂ
ರಂಗೇಶ್ವರಸ್ಯ ರಮಯಾ ವಿನಿವೇದ್ಯಮಾನೇ ।
ಪಾರ್ಶ್ವೇ ಪರತ್ರ ಭವತೀ ಯದಿ ತತ್ರ ನಾಸೀತ್
ಪ್ರಾಯೇಣ ದೇವಿ ವದನಂ ಪರಿವರ್ತಿತಂ ಸ್ಯಾತ್ ॥

ಅನುವಾದ

ಕಾಯಬೇಕೆನೆ ಹಸಿಗೆಡುಕರನು-
ಪಾಯದಲಿ ರಂಗೇಶನೊಳು ರಮೆ
ಬಾಯ ತೆರೆದುರೆ ಬೇಡುವೊಡೆ ಮತ್ತೊಂದು ಕೆಲದೊಳಗೆ ।
ತಾಯೆ! ನೀನಿರದಿದ್ದೊಡಾ ಕಂ-
ಜಾಯತಾಕ್ಷನು ಮೋರೆಯನು ತಾ-
ನೀಯದೆಯೆ ಬೇರೆಡೆಗೆ ತಿರುವಿರುತಿದ್ದನೇನೊ ಕಣಾ! ॥

## ೨೫

ಮೂಲ

ಗೋದೇ ಗುಣೈರಪನಯನ್ ಪ್ರಣತಾಪರಾಧಾನ್
ಭ್ರೂಕ್ಷೇಪ ಏವ ತವ ಭೋಗರಸಾನುಕೂಲಃ ।
ಕರ್ಮಾನುಬಂಧಿಫಲದಾನರತಸ್ಯ ಭರ್ತುಃ
ಸ್ವಾತಂತ್ರ್ಯದುರ್ವ್ಯಸನಮರ್ಮಭಿದಾ ನಿದಾನಮ್ ॥

ಅನುವಾದ

ಸೆಳೆಯುತೊಗೆಯಲು ನಮಿಪರಪಕೃತಿ-
ಗಳನು ಗೋದೆಯೆ! ಹುಬ್ಬಿನಲೆಗಳೆ
ಬಳಕೆಗಹುವಲೆ ನಿನ್ನ ಭೋಗರಸಾನುಕೂಲತೆಗೆ ।
ಫಲವನೀವೊಡೆ ವಿಗತಕರ್ಮವ-
ನಳೆದು ನೀಡುವ ನಿನ್ನ ಪತಿಯೊಳು
ಬೆಳೆದಿಹ ಸ್ವಾತಂತ್ರ್ಯದುರ್ವ್ಯಸನವನು ಮುಳುಗಿಸಲು ॥

# ೨೬

ಮೂಲ

ರಂಗೇ ತಟಿದ್ಗುಣವತೋ ರಮಯ್ಯೈವ ಗೋದೇ
ಕೃಷ್ಣಾಂಬುದಸ್ಯ ಘಟಿತಾಂ ಕೃಪಯಾ ಸುವೃಷ್ಟ್ಯಾ ।
ದೌರ್ಗತ್ಯದುರ್ವಿಷವಿನಾಶಸುಧಾನದೀಂ ತ್ವಾಂ
ಸಂತಃ ಪ್ರಪದ್ಯ ಶಮಯಂತ್ಯಚಿರೇಣ ತಾಪಾನ್ ॥

ಅನುವಾದ

ಅಂಬೆ! ರಂಗಕ್ಷೇತ್ರದೊಳು ಕೃಪೆ-
ದುಂಬಿರುವ ಕಾರ್ಮೋಡವಿಹುದೊಂ-
ದಂಬುಧಿಜೆಯೆನೆ ಬಳ್ಳಿಮಿಂಚನು ಸೇರಿ ಮಳೆ ಸುರಿಯೆ ।
ಇಂಬು ತಾನದಕಾದೆ ದುರ್ಗತಿ-
ಯೆಂಬ ವಿಷಗಳೆವಮೃತನದಿ ನೀ,
ನಂಬಿ ನಿನ್ನನು ತಾಪಗಳೆವರು ಸಾಧುಸಜ್ಜನರು ॥

# ೨೭

ಮೂಲ

ಜಾತಾಪರಾಧಮಪಿ ಮಾಮನುಕಂಪ್ಯ ಗೋದೇ
ಗೋಪ್ತ್ರೀ ಯದಿ ತ್ವಮಸಿ ಯುಕ್ತಮಿದಂ ಭವತ್ಯಾಃ ।
ವಾತ್ಸಲ್ಯನಿರ್ಭರತಯಾ ಜನನೀ ಕುಮಾರಂ
ಸ್ತನ್ಯೇನ ವರ್ಧಯತಿ ದಷ್ಟಪಯೋಧರಾಽಪಿ ॥

ಅನುವಾದ

ಹುಟ್ಟುಗೇಡಿಗನೆನ್ನನುರೆ ಕಾ-
ಪಿಟ್ಟು ಸಲಹಲು ಕರುಣದಿಂದಲಿ
ನೆಟ್ಟನಿದು ನಿನಗಹುದು ತಕ್ಕುದು; ತಾಯೆನಿಪ್ಪವಳು ।
ಅಟ್ಟಿ ತನ್ನಯ ನೋವ, ಬೆಳೆಸಳೆ
ಕೊಟ್ಟು ತನ್ನೆದೆವಾಲನಲೆ, ಮೊಲೆ-
ತೊಟ್ಟ ಕಡಿದೊಡೆ ಮಗುವನುರುವಾತ್ಸಲ್ಯದೊಳು ಗೋದೆ? ॥

# ೨೮

ಮೂಲ

ಶತಮಖಮಣಿನೀಲಾ ಚಾರು ಕಲ್ಹಾರಹಸ್ತಾ
ಸ್ತನಭರನಮಿತಾಂಗೀ ಸಾಂದ್ರವಾತ್ಸಲ್ಯಸಿಂಧುಃ ।
ಅಲಕವಿನಿಹಿತಾಭಿಃ ಸ್ರಗ್ಭಿರಾಕೃಷ್ಟನಾಥಾ
ವಿಲಸತು ಹೃದಿ ಗೋದಾ ವಿಷ್ಣುಚಿತ್ತಾತ್ಮಜಾ ನಃ ॥

ಅನುವಾದ

ಸುರಪಮಣಿಯಂತೆಸೆವ ನೀಲಿಯ,
ಕರದೆ ನೈದಿಲೆವಿಡಿದ, ಕುಚಯುಗ-
ಭರಣದಿಂ ಮೈಬಾಗಿದಾ ವಾತ್ಸಲ್ಯತೋಯಧಿಯು ।
ಕುರುಳ ದಂಡೆಯೊಳೆಳೆದು ನಾಥನ-
ನಿರಿಸಿಕೊಂಡಾಳುವವಳೆಂದಿಗು
ಮೆರೆದು ಹೃದಯದಿ ನಲಿಯುಗೆಮ್ಮೊಳು ವಿಷ್ಣುಚಿತ್ತಸುತೆ ॥

# ೨೯

ಮೂಲ

ಇತಿ ವಿಕಸಿತಭಕ್ತೇರುತ್ಥಿತಾಂ ವೇಂಕಟೇಶಾತ್
ಬಹುಗುಣರಮಣೀಯಾಂ ವಕ್ತಿ ಗೋದಾಸ್ತುತಿಂ ಯಃ ।
ಸ ಭವತಿ ಬಹುಮಾನ್ಯಃ ಶ್ರೀಮತೋ ರಂಗಭರ್ತುಃ
ಚರಣಕಮಲಸೇವಾಂ ಶಾಶ್ವತೀಮಭ್ಯುಪೈಷ್ಯನ್ ॥

ಅನುವಾದ

ಇಂತು ಮಲರಿದ ಭಕ್ತಿಯೊಳು ತಾ
ನೋಂತ ವೇಂಕಟನಾಥನಿಂದಾ-
ದ್ಯಂತಗುಣರಮ್ಯವಿಹ ಗೋದಾಸ್ತುತಿಯು ಹುಟ್ಟಿರಲು ।
ಕಂತುಜನಕನ ರಂಗನಾಥನ-
ನಂತವಹ ಚರಣಾಬ್ಜಸೇವೆಯ
ಸಂತತವು ಪಡೆದೊಪ್ಪುವನು ತಾನಾವನಿದನುಲಿಯೆ ॥



ಶ್ರೀ ವೇದಾಂತದೇಶಿಕರು
(ಸಾ.ಶ. ೧೨೬೮–೧೩೬೯)

ವಿಶಿಷ್ಟಾದ್ವೈತ ಪರಂಪರೆಯಲ್ಲಿ ಶ್ರೀರಾಮಾನುಜಾಚಾರ್ಯರ ಬಳಿಕ ಪ್ರಾಯಃ ಅಷ್ಟೇ ಗೌರವದಿಂದ ಕಾಣಲ್ಪಡುವ ಮತ್ತೊಂದು ಹೆಸರು 'ಕವಿತಾರ್ಕಿಕಕೇಸರಿ' ಎಂದು ಬಿರುದಾಂಕಿತರಾದ ಶ್ರೀ ವೇದಾಂತದೇಶಿಕರದು. ವಿಶಿಷ್ಟಾದ್ವೈತ ಸಿದ್ಧಾಂತದ ಬುನಾದಿಯು ಇವರ ತರ್ಕಕರ್ಕಶವಾದ ಪಾಂಡಿತ್ಯದಿಂದಲೂ ಹಾಗೂ ಪ್ರಪತ್ತಿಪಾರಮ್ಯವನ್ನುಳ್ಳ ಸ್ತೋತ್ರಕಾವ್ಯಗಳಿಂದಲೂ ಮತ್ತಷ್ಟು ಸುಭದ್ರ-ವಾಯಿತು. ಪ್ರಸ್ತುತ ಕೃತಿಯು ಇವರಿಂದ ರಚಿತವಾದ 'ಗೋದಾಸ್ತುತಿ'ಯ ಕನ್ನಡದ ಪದ್ಯಾವತರಣಿಕೆಯಾಗಿದೆ. ದೇಶಿಕರ ಗೋದಾಸ್ತುತಿಯು ಕೇವಲ ನೀರಸವಿಶೇಷಣಗಳ ಸಂತೆಯಾಗಿರದೆ, ಉನ್ನತಕಾವ್ಯಲಕ್ಷಣಗಳಿಂದ ಪರಿ-ಪುಷ್ಟವಾಗಿದೆ. ಸಂಸ್ಕೃತದ ಮೂಲಕೃತಿಯ ಮುಕ್ತಕಗಳು ವಸಂತತಿಲಕಾ/ಮಾಲಿನೀ ಛಂದಸ್ಸುಗಳಲ್ಲಿ ರಚಿತವಾಗಿದ್ದರೆ ಪ್ರಸ್ತುತಕೃತಿಯಲ್ಲಿ ಅವುಗಳನ್ನು ಕನ್ನಡದ ಭಾಮಿನೀ ಷಟ್ಪದಿಯ ಛಂದಸ್ಸಿಗೆ ಅಳವಡಿಸಿ ನಡುಗನ್ನಡದ ತಿಳಿನುಡಿಯಲ್ಲಿ ಪ್ರತಿಯೊಂದು ಮುಕ್ತಕದ ಭಾವಾನುವಾದವನ್ನು ಮಾಡಲಾಗಿದೆ.